ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 108 |
| ಸದಸ್ಯರ ಹೆಸರು | ಶ್ರೀ.ಐವನ್ ಡಿ' ಸೋಜಾ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 02-03-2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಮಲೇರಿಯಾ ನಿಯಂತ್ರಣಕ್ಕೆ ಆರೋಗ್ಯ ಇಲಾಖೆಯಿಂದ ಯಾವ ಯೋಜನೆ ನಿರೂಪಿಸಲಾಗಿದೆ; | ರಾಷ್ಟ್ರೀಯ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣ ಕಾರ್ಯಕ್ರಮವು (National Vector Borne Disease Control Programme) NVBDCP ರಾಜ್ಯದಲ್ಲಿ ಜಾಲ್ತಿಯಲ್ಲಿದ್ದು, 2025ರ ವೇಳೆಗೆ ಮಲೇರಿಯ ಮುಕ್ತ ರಾಜ್ಯವನ್ನಾಗಿಸುವ ಗುರಿಯನ್ನು ಹೊಂದಲಾಗಿದೆ. |
| ಆ | 2018-19 ಮತ್ತು 2019-20 ನೇ ಸಾಲಿನಲ್ಲಿ ಮಲೇರಿಯಾ ನಿಯಂತ್ರಣಕ್ಕಾಗಿ ಖರ್ಚು ಮಾಡಿದ ಅನುದಾನ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ಮಲೇರಿಯಾ ನಿಯಂತ್ರಣಕ್ಕಾಗಿ 2018-19ನೇ ಸಾಲಿನಲ್ಲಿ ರೂ.202.36 ಲಕ್ಷಗಳನ್ನು ಮತ್ತು 2019-20ನೇ ಸಾಲಿನಲ್ಲಿ ರೂ.201.87 ಲಕ್ಷಗಳನ್ನು ಖರ್ಚು ಮಾಡಲಾಗಿದೆ. ಜಿಲ್ಲಾವಾರು ವಿವರಗಳನ್ನು <u>ಅನುಬಂಧ-1ರಲ್ಲಿ</u> ನೀಡಲಾಗಿದೆ. |
| ಇ | ಮಂಗಳೂರು ಸೇರಿದಂತೆ ಅನೇಕ ಜಿಲ್ಲೆಗಳಲ್ಲಿ ಮಲೇರಿಯಾ ಪ್ರಕರಣ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ಬಂದಿದೆ<br>ರಾಜ್ಯದ ಒಟ್ಟು ಮಲೇರಿಯ ಪ್ರಕರಣಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ (ಮಂಗಳೂರು) ಶೇ.80ಕ್ಕೂ ಹೆಚ್ಚು ಮಲೇರಿಯ ಪ್ರಕರಣಗಳು ವರದಿಯಾಗಿದ್ದು, ಉಳಿದ 29 ಜಿಲ್ಲೆಗಳಲ್ಲಿ ಮಲೇರಿಯ ರೋಗವು ನಿಯಂತ್ರಣದಲ್ಲಿರುತ್ತದೆ.<br>ರೋಗ ನಿಯಂತ್ರಣಕ್ಕಾಗಿ ತೆಗೆದುಕೊಂಡ ಕ್ರಮದ ಬಗ್ಗೆ <u>ಅನುಬಂಧ-2ರಲ್ಲಿ</u> ನೀಡಲಾಗಿದೆ |
| ಈ | ಕೇಂದ್ರ ಮತ್ತು ರಾಜ್ಯಗಳಲ್ಲಿ ಮಲೇರಿಯಾ ನಿಯಂತ್ರಣಕ್ಕೆ ಕೈಗೊಂಡಿರುವ ಹೊಸ ಯೋಜನೆಗಳಾವುವು? (ವಿವರ ನೀಡುವುದು) | ಕೇಂದ್ರ ಹಾಗೂ ರಾಜ್ಯದ ವತಿಯಿಂದ ಮಲೇರಿಯಾ ರೋಗದ ನಿಯಂತ್ರಣದ ಬಗ್ಗೆ ಭಾರತ ಸರ್ಕಾರದ ಅನುದಾನಿತ ಸ್ವಾಯತ್ತ ಸಂಸ್ಥೆಗಳಾದ ರಾಷ್ಟ್ರೀಯ ರೋಗಗಳ ನಿಯಂತ್ರಣ ಕೇಂದ್ರ (National Centre for Disease Control) ಹಾಗೂ ರಾಷ್ಟ್ರೀಯ ಮಲೇರಿಯಾ ಸಂಶೋಧನಾ ಸಂಸ್ಥೆ (National Institute of Malaria Research) ಇವು ಹೆಚ್ಚಿನ ಸಂಶೋಧನೆಯಲ್ಲಿ ತೊಡಗಿರುತ್ತವೆ. ಕೇಂದ್ರ ಮತ್ತು ರಾಜ್ಯ ಸೇರಿದಂತೆ ರಾಷ್ಟ್ರೀಯ ಮಲೇರಿಯ ನಿವಾರಣ ಚೌಕಟ್ಟು ಮಾರ್ಗದರ್ಶಿಯನ್ನು 2016 ರಿಂದ 2030ರವರೆಗೆ ಜಾರಿಗೊಳಿಸಲಾಗಿದೆ. ಅದರಂತೆ ರಾಜ್ಯವು ಮಲೇರಿಯಾ ನಿವಾರಣಾ ಹಂತದಲ್ಲಿದ್ದು 2020ರ ಅಂತ್ಯದ ವೇಳೆಗೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಮಲೇರಿಯ ಪ್ರಕರಣಗಳನ್ನು "ಶೂನ್ಯ" ಕ್ಕೆ ತರುವ ಗುರಿಯನ್ನು ಹಾಗೂ 2025ಕ್ಕೆ ರಾಜ್ಯವನ್ನು ಮಲೇರಿಯ ಮುಕ್ತ ರಾಜ್ಯವನ್ನಾಗಿಸುವ ಗುರಿ ಹೊಂದಲಾಗಿದೆ. |

ಆಕುಕ 2 ಎಸ್‌ಎಂಎಂ 2020

(ಬಿ.ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

## ಅನುಬಂಧ-1 ಪ್ರಶ್ನೆ ಸಂಖ್ಯೆ:108

| ಕ್ರ.ಸಂಖ್ಯೆ | ಜಿಲ್ಲೆ | 2018 –19ನೇ ಸಾಲಿನಲ್ಲಿ ಖರ್ಚಾದ ಅನುದಾನ (ಲಕ್ಷಗಳಲ್ಲಿ) | 2019 –20ನೇ ಸಾಲಿನಲ್ಲಿ ಖರ್ಚಾದ ಅನುದಾನ |
|---|---|---|---|
| 1 | ಬಾಗಲಕೋಟೆ | 5.98 | 6.01 |
| 2 | ಬೆಂಗಳೂರು (ಗ್ರಾ) | 11.13 | 2.16 |
| 3 | ಬೆಂಗಳೂರು (ನ) | 4.94 | 13.87 |
| 4 | ಬೆಳಗಾವಿ | 11.67 | 9.70 |
| 5 | ಬಳ್ಳಾರಿ | 3.68 | 3.57 |
| 6 | ಬೀದರ್ | 2.46 | 2.44 |
| 7 | ವಿಜಯಪುರ | 4.55 | 2.07 |
| 8 | ಚಾಮರಾಜನಗರ | 3.55 | 2.58 |
| 9 | ಚಿಕ್ಕಬಳ್ಳಾಪುರ | 2.69 | 2.47 |
| 10 | ಚಿಕ್ಕಮಗಳೂರು | 3.60 | 3.27 |
| 11 | ಚಿತ್ರದುರ್ಗ | 6.83 | 8.37 |
| 12 | ದಕ್ಷಿಣ ಕನ್ನಡ | 41.85 | 37.92 |
| 13 | ದಾವಣಗೆರೆ | 2.30 | 2.06 |
| 14 | ಧಾರವಾಡ | 3.64 | 4.28 |
| 15 | ಗದಗ | 11.78 | 12.85 |
| 16 | ಕಲಬುರಗಿ | 13.68 | 7.77 |
| 17 | ಹಾಸನ | 3.51 | 2.86 |
| 18 | ಹಾವೇರಿ | 3.98 | 3.43 |
| 19 | ಕೊಡಗು | 3.30 | 3.00 |
| 20 | ಕೋಲಾರ | 4.63 | 6.26 |
| 21 | ಕೊಪ್ಪಳ | 5.45 | 5.42 |
| 22 | ಮಂಡ್ಯ | 2.94 | 2.68 |
| 23 | ಮೈಸೂರು | 7.30 | 6.12 |
| 24 | ರಾಯಚೂರು | 4.45 | 11.00 |
| 25 | ರಾಮನಗರ | 1.12 | 2.62 |
| 26 | ಶಿವಮೊಗ್ಗ | 2.73 | 1.90 |
| 27 | ತುಮಕೂರು | 7.20 | 4.13 |
| 28 | ಉಡುಪಿ | 13.85 | 20.10 |
| 29 | ಉತ್ತರ ಕನ್ನಡ | 3.80 | 5.53 |
| 30 | ಯಾದಗಿರಿ | 3.77 | 5.43 |
| ಒಟ್ಟು | | **202.36** | **201.87** |

## ಅನುಬಂಧ-2 ಪ್ರಶ್ನೆ ಸಂಖ್ಯೆ:108

**ಮಲೇರಿಯಾ ರೋಗಗಳ ನಿಯಂತ್ರಣಕ್ಕಾಗಿ ಸರ್ಕಾರ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ವಿವರ ಹೀಗಿದೆ.**

1. ಮಲೇರಿಯಾ ರೋಗವನ್ನು ಕರ್ನಾಟಕ ಸಾರ್ವಜನಿಕ ಆರೋಗ್ಯ ನಿಯಮಗಳ ಅಡಿಯಲ್ಲಿ ಅಧಿಸೂಚಿತ ರೋಗವೆಂದು ಪ್ರಕಟಿಸಲಾಗಿದೆ.
2. ಈ ರೋಗದ ಶೀಘ್ರ ಪತ್ತೆಗಾಗಿ ಆರೋಗ್ಯ ಕಾರ್ಯಕರ್ತರು ಹಾಗೂ ಆಶಾ ಕಾರ್ಯಕರ್ತೆಯರು ಮನೆ ಮನೆಗೆ ಭೇಟಿ ನೀಡುವ ಮೂಲಕ ಜ್ವರ ಸಮೀಕ್ಷಾ ಕಾರ್ಯವನ್ನು ನಿರಂತರವಾಗಿ ಮಾಡುತ್ತಿದ್ದಾರೆ.
3. ಕಾರ್ಯಕ್ರಮದ ಯಶಸ್ವಿ ಅನುಷ್ಠಾನಕ್ಕಾಗಿ ಅಗತ್ಯ ಮಾರ್ಗಸೂಚಿ ಹಾಗು ಅನುದಾನವನ್ನು ಸಕಾಲಕ್ಕೆ ಬಿಡುಗಡೆ ಮಾಡಲಾಗಿದ್ದು, ಕ್ಷೇತ್ರಮಟ್ಟದಲ್ಲಿ ಕ್ರಿಯಾಯೋಜನೆ ಅನ್ವಯ ಕಾರ್ಯಗತಗೊಳಿಸಲು ಸೂಚನೆಗಳನ್ನು ನೀಡಲಾಗಿದೆ.
4. ಅಗತ್ಯ ಪ್ರಮಾಣದ ಮಲೇರಿಯಾ ನಿರೋಧಕ ಔಷಧಿಗಳು, ಕೀಟನಾಶಕ ಹಾಗು ಲಾರ್ವ ನಾಶಕಗಳ ದಾಸ್ತಾನುಗಳು ಮತ್ತು ಈ ರೋಗ ನಿರ್ವಹಣೆಗೆ ಬೇಕಾಗುವ ಜೀವರಕ್ಷಕ ಔಷಧಿಗಳನ್ನು ಜಿಲ್ಲಾ ಮಟ್ಟದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಇರಿಸಲಾಗಿದೆ.
5. ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳು ಆಯಾ ಜಿಲ್ಲಾ ಉಸ್ತುವಾರಿ ಸಚಿವರ ನೇತೃತ್ವದಲ್ಲಿ ಕಾಲಕಾಲಕ್ಕೆ ಆರೋಗ್ಯ ಇಲಾಖೆಯ ಇತರ ಕಾರ್ಯಕ್ರಮಗಳ ಪ್ರಗತಿ ಪರಿಶೀಲನಾ ಸಭೆಯನ್ನು ನಡೆಸುವುದರ ಜೊತೆಗೆ ರೋಗ ನಿಯಂತ್ರಣಕ್ಕೆ ಅವಶ್ಯ ಸಲಹೆ ಸೂಚನೆಗಳನ್ನು ನೀಡುತ್ತಾರೆ.
6. ರಾಜ್ಯಮಟ್ಟದಲ್ಲಿ ಯೋಜನಾ ನಿರ್ದೇಶಕರು ಐ.ಡಿ.ಎಸ್.ಪಿ, ರವರು ಸಮಗ್ರ ರೋಗಗಳ ದೈನಂದಿನ ಮಾಹಿತಿಯನ್ನು ಪರಿಶೀಲಿಸಿ, ಕ್ಷೇತ್ರಮಟ್ಟದಲ್ಲಿ ಕೈಗೊಳ್ಳಬೇಕಾದ ನಿಯಂತ್ರಣ ಕ್ರಮಗಳ ಅನುಷ್ಠಾನದ ಕುರಿತು ಸೂಚನೆಗಳನ್ನು ನೀಡುತ್ತಾರೆ.
7. ಮಲೇರಿಯ ನಿಯಂತ್ರಣದಲ್ಲಿ ಅನಾಫಿಲಿಸ್ ಸೊಳ್ಳೆಯ ನಿರ್ಮೂಲನಾ ಚಟುವಟಿಕೆಯೇ ಪ್ರಧಾನವಾಗಿದ್ದು, ಈ ಚಟುವಟಿಕೆಯನ್ನು ಎಲ್ಲಾ ಸಮಸ್ಯಾತ್ಮಕ ಪ್ರದೇಶಗಳಲ್ಲಿ ಆದ್ಯತೆಯ ಮೇರೆಗೆ ಕೈಗೊಳ್ಳಲಾಗುತ್ತಿದೆ.
8. ಯಾವುದೇ ವ್ಯಕ್ತಿಯಲ್ಲಿ ಜ್ವರ ಕಂಡುಬಂದಲ್ಲಿ ರಕ್ತದ ಮಾದರಿಯನ್ನು ಸಂಗ್ರಹಿಸಿ, ರೋಗ ಪತ್ತೆಗಾಗಿ ಪ್ರಯೋಗಾಲಯಗಳಿಗೆ ಕಳುಹಿಸಲಾಗುತ್ತಿದೆ.
9. ತ್ವರಿತ ಪತ್ತೆ ಕಿಟ್‌ಗಳು ಮತ್ತು ರಕ್ತ ಮಾದರಿಯನ್ನು ಸಂಗ್ರಹಿಸಿ, ಉಚಿತವಾಗಿ ಪರೀಕ್ಷಿಸಿ, ದೃಢಪಟ್ಟ ಪ್ರಕರಣಗಳಿಗೆ ತೀವ್ರ ಚಿಕಿತ್ಸೆಯನ್ನು ಉಚಿತವಾಗಿ ತಕ್ಷಣವೇ ನೀಡಲು ರಾಜ್ಯಾದ್ಯಂತ ವ್ಯವಸ್ಥೆಗೊಳಿಸಲಾಗಿದೆ.
10. ಖಾಸಗಿ ವೈದ್ಯರುಗಳಿಗೆ ಎಲ್ಲಾ ಜಿಲ್ಲೆಗಳಲ್ಲಿ ಐ.ಎಂ.ಎ ಮೂಲಕ ಸೂಕ್ತ ಮಾಹಿತಿ ಹಾಗೂ ರೋಗ ನಿರ್ವಹಣೆಯ ಬಗ್ಗೆ ಪುನರ್‌ಮನನ ತರಭೇತಿ ನೀಡಲಾಗುತ್ತಿದೆ.
11. ಎಲ್ಲಾ ಖಾಸಗಿ ವೈದ್ಯರು ಹಾಗೂ ಸರ್ಕಾರಿ ವೈದ್ಯರುಗಳಿಗೆ ಮಲೇರಿಯ ಜ್ವರದ ರೋಗಿಗಳ ನಿರ್ವಹಣೆ ಮತ್ತು ಚಿಕಿತ್ಸೆ ಬಗ್ಗೆ ಸೂಕ್ತ ಮಾರ್ಗದರ್ಶನವನ್ನು ನೀಡಲಾಗಿದೆ.
12. ಎಲ್ಲಾ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಮಲೇರಿಯ ರೋಗಿಗಳ ಚಿಕಿತ್ಸೆ ಮತ್ತು ನಿರ್ವಹಣೆಗೆ ಸೌಲಭ್ಯಗಳನ್ನು ಕಲ್ಪಿಸಲಾಗಿದೆ. ಅಲ್ಲದೆ ಎಲ್ಲಾ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳಿಗೆ ಅವಶ್ಯ ತರಭೇತಿ ನೀಡಿ ಪ್ರಾಥಮಿಕ ಹಂತದ ಮಲೇರಿಯ ರೋಗಿಗಳನ್ನು ಚಿಕಿತ್ಸೆ ಒದಗಿಸಲು ವ್ಯವಸ್ಥೆ ಮಾಡಲಾಗಿದೆ.
13. ಲಾರ್ವಾನಾಶಕ ಮತ್ತು ಧೂಮೀಕರಣ ಕೀಟನಾಶಕಗಳನ್ನು ಜಿಲ್ಲೆಗಳಿಗೆ ಸರಬರಾಜು ಮಾಡಲಾಗಿದ್ದು, ಸೊಳ್ಳೆಗಳ ಹಾಗೂ ಲಾರ್ವಾ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳಲಾಗಿದೆ.
14. ಮಾಹೆವಾರು ಕೈಗೊಳ್ಳಬೇಕಾದ ಚಟುವಟಿಕೆಗಳ ಕ್ರಿಯಾ ಯೋಜನೆಯನ್ನು ತಯಾರಿಸಿ ಎಲ್ಲಾ ಜಿಲ್ಲಾ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣಾಧಿಕಾರಿಗಳಿಗೆ ಕಳುಹಿಸಿ ಜಿಲ್ಲಾ ಮಟ್ಟದಿಂದ ಗ್ರಾಮ ಮಟ್ಟದವರೆಗೆ ಎಲ್ಲಾ ಹಂತದಲ್ಲಿಯೂ ಈ ಕ್ರಿಯಾ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.
15. ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆ ಮತ್ತು ಗ್ರಾಮೀಣಾಭಿವೃದ್ಧಿ ಇಲಾಖೆಗೆ ಅರೆಸರ್ಕಾರಿ ಪತ್ರಗಳನ್ನು ಬರೆದಿದ್ದು, ಎಲ್ಲಾ ರೀತಿಯ ಜ್ವರದ ನಿಯಂತ್ರಣದಲ್ಲಿ ಸದರಿ ಇಲಾಖೆಗಳ ಪಾತ್ರವನ್ನು ಸೂಚಿಸುತ್ತಾ ಅದರಂತೆ ಇವುಗಳ ನಿಯಂತ್ರಣಕ್ಕೆ ಸೂಕ್ತ ಕ್ರಮ ಕೈಗೊಳ್ಳಲು ಕೋರಲಾಗಿದೆ.
16. ಶಾಲೆಗಳಲ್ಲಿ ಆರೋಗ್ಯ ಕಾರ್ಯಕ್ರಮಗಳನ್ನು ನಡೆಸುವ ಮೂಲಕ ಮಲೇರಿಯ ನಿಯಂತ್ರಣ ವಿಷಯವನ್ನು ವಿಶೇಷವಾಗಿ ಪ್ರಸ್ತಾಪಿಸಿ, ಶಾಲೆಗಳ ಮುಖಾಂತರ ಸಮುದಾಯದಲ್ಲಿ ಈ ಬಗ್ಗೆ ಅರಿವು ಮೂಡಿಸಲಾಗುತ್ತಿದೆ. ವ್ಯಾಪಕ ಆರೋಗ್ಯ ಶಿಕ್ಷಣ ಚಟುವಟಿಕೆಗಳನ್ನು ರಾಜ್ಯಾದ್ಯಂತ ಹಮ್ಮಿಕೊಳ್ಳಲಾಗಿದೆ.
17. ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಅಧ್ಯಕ್ಷತೆಯಲ್ಲಿ ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಮತ್ತು ಜಿಲ್ಲಾ ಸಾಂಕ್ರಾಮಿಕ ರೋಗಗಳ (ವಿಬಿಡಿ) ಅಧಿಕಾರಿಗಳ ಸಭೆಯನ್ನು ಕರೆದು ಮಲೇರಿಯಾ ನಿಯಂತ್ರಣದ ಬಗ್ಗೆ ಚರ್ಚಿಸಲಾಗಿದೆ.

18. ರೋಗಗಳ ನಿಯಂತ್ರಣಕ್ಕಾಗಿಯೇ ರಾಜ್ಯಮಟ್ಟದಲ್ಲಿ ದ್ವೈಮಾಸಿಕ ಸಭೆಯನ್ನು ಕರೆಯಲಾಗುತ್ತಿದ್ದು, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮಾಧಿಕಾಗಳಿಗೆ ಮತ್ತು ನೋಡಲ್ ಅಧಿಕಾರಿಗಳಿಗೆ ಮಲೇರಿಯ ನಿಯಂತ್ರಣದ ಬಗ್ಗೆ ಹಾಗೂ ದಾಸ್ತಾನುಗಳ ಬಗ್ಗೆ ಮತ್ತು ನಿಯಂತ್ರಣ ಕಾರ್ಯಕ್ರಮಗಳ ಬಗ್ಗೆ ಸಲಹೆ ಸೂಚನೆಗಳನ್ನು ನೀಡಲಾಗಿದೆ.
19. 2019-20ರಲ್ಲಿ ಬೇಕಾದ ಜೀವರಕ್ಷಕ ಔಷಧಿಗಳು, ಕೀಟನಾಶಕ ದ್ರಾವಣಗಳನ್ನು ಸಾಕಷ್ಟು ಪ್ರಮಾಣದಲ್ಲಿ ದಾಸ್ತಾನು ಇರಿಸಲಾಗಿದ್ದು, ಯಾವುದೇ ತುರ್ತು ಸಂದರ್ಭ ಒದಗಿ ಬಂದಲ್ಲಿ ತಕ್ಷಣ ಸ್ಪಂದಿಸಲು ಪ್ರತಿ ಜಿಲ್ಲೆಯಲ್ಲಿ ಕ್ಷಿಪ್ರ ಪ್ರತಿಕ್ರಿಯಾ ತಂಡಗಳನ್ನು ರಚಿಸಲಾಗಿದೆ.
20. ಮಲೇರಿಯಾ ನಿಯಂತ್ರಣ ಬಗ್ಗೆ ಜೂನ್ ತಿಂಗಳಲ್ಲಿ ಜಾಗೃತಿ ಕಾರ್ಯಕ್ರಮಗಳನ್ನು ರಾಜ್ಯದ ಎಲ್ಲಾ ಜಿಲ್ಲೆಯಾದ್ಯಂತ ನಡೆಸಲಾಗಿರುತ್ತದೆ. ವಿಶೇಷವಾಗಿ ಕರಾವಳಿ ಜಿಲ್ಲೆಗಳಲ್ಲಿ ಹೆಚ್ಚು ಕಾರ್ಯಕ್ರಮಗಳನ್ನು ನಡೆಸಲಾಗಿದೆ.
21. ಕರಾವಳಿ ಜಿಲ್ಲೆಗಳನ್ನೊಳಗೊಂಡು ದಕ್ಷಿಣ ಕನ್ನಡ ಜಿಲ್ಲೆಯ ಆಯ್ದ 100 ಪ್ರೌಢಶಾಲೆಗಳಲ್ಲಿ ಕ್ವಿಝ್ ಕಾರ್ಯಕ್ರಮದ ಮುಖಾಂತರ ಶಾಲಾ ಮಕ್ಕಳಿಗೆ ಮಲೇರಿಯ ರೋಗವನ್ನು ಆರಂಭದಲ್ಲಿಯೇ ಪತ್ತೆ ಹಚ್ಚುವ ನಿಯಂತ್ರಣದ ಬಗ್ಗೆ ಆರೋಗ್ಯ ಶಿಕ್ಷಣವನ್ನು ನಿರಂತರವಾಗಿ ನೀಡಲಾಗುತ್ತಿದೆ.
22. ಕಟ್ಟಡ ನಿರ್ಮಾಣ, ರಸ್ತೆಕಾಮಗಾರಿಗಳ ಗುತ್ತಿಗೆದಾರರಿಗೆ ಮಲೇರಿಯ ನಿಯಂತ್ರಣ ಹಾಗೂ ಲಾರ್ವಾ ನಾಶಗೊಳಿಸುವ ಬಗ್ಗೆ ಆರೋಗ್ಯ ಶಿಕ್ಷಣ ನೀಡಲಾಗುತ್ತಿದೆ ಮತ್ತು ಮುಂದಿನ ನಿಯಂತ್ರಣದ ಬಗ್ಗೆ ಸೂಚನೆ ನೀಡಲಾಗಿದೆ.
23. ಕ್ರಿಮಿನಾಶಕ ಸಿಂಪಡಿತ ಸೊಳ್ಳೆಪರದೆಯನ್ನು ರೋಗಸಾಂದ್ರತೆ ಹೆಚ್ಚಾಗಿರುವ ಪ್ರದೇಶಗಳಲ್ಲಿನ ಕುಟುಂಬಗಳಿಗೆ ವಿತರಿಸಲಾಗುತ್ತಿದೆ.
24. ರಾಜ್ಯದಲ್ಲಿ ಒಟ್ಟಾರೆ ಕಳೆದ 3 ವರ್ಷಗಳಲ್ಲಿ ಮಲೇರಿಯಾ ರೋಗವು ಗಮನಾರ್ಹವಾಗಿ ಇಳಿಮುಖವಾಗಿರುತ್ತದೆ. ಒಟ್ಟಾರೆ ರಾಜ್ಯದಲ್ಲಿ ಮಲೇರಿಯಾ ರೋಗವು ನಿರ್ಮೂಲನಾ ಹಂತವನ್ನು ತಲುಪಿದ್ದು, 2022ರ ವೇಳೆಗೆ ಈ ರೋಗವನ್ನು ರಾಜ್ಯದಲ್ಲಿ ಸಂಪೂರ್ಣವಾಗಿ ಶೂನ್ಯ ಹಂತಕ್ಕೆ ತರಲು ಮಲೇರಿಯಾ ನಿರ್ಮೂಲನಾ ಚೌಕಟ್ಟು ಮಾರ್ಗದರ್ಶಿಯನ್ನು ಜಾರಿಗೊಳಿಸಲಾಗಿದೆ. ಇಲಾಖೆಯು ಮಲೇರಿಯಾ ನಿಯಂತ್ರಣಕ್ಕಾಗಿ ಭಾರತ ಸರ್ಕಾರದ ಮಾರ್ಗಸೂಚಿಯಂತೆ ಎಲ್ಲಾ ನಿಯಂತ್ರಣ ಕ್ರಮಗಳನ್ನು ಮುಂದುವರೆಸಿರುತ್ತದೆ.